/

## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 771 |
| 2 | ಸದಸ್ಯರ ಹೆಸರು | : | ಶ್ರೀ. ಎನ್. ಅಪ್ಪಾಜಿಗೌಡ |
| 3 | ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು |
| 4 | ಉತ್ತರಿಸಬೇಕಾದ ದಿನಾಂಕ | : | 10.03.2020 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 2 ವರ್ಷಗಳಿಂದ ತೋಟಗಾರಿಕೆ ವಿಶ್ವವಿದ್ಯಾಲಯದ ಕುಲಪತಿಗಳ ಹುದ್ದೆ ಖಾಲಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಕೈಗೊಂಡ ಕ್ರಮಗಳೇನು; | ಹೌದು.<br>ಕುಲಪತಿಗಳ ಹುದ್ದೆಯನ್ನು ಭರ್ತಿ ಮಾಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಆಯ್ಕೆ ಸಮಿತಿಯು ಈ ಅರ್ಜಿಗಳನ್ನು ಪರಾಮರ್ಶೆ ಮಾಡುತ್ತಲಿದ್ದು, ಅಂತಿಮ ಹಂತದಲ್ಲಿದೆ. |
| ಆ) | ಸದರಿ ಹುದ್ದೆ ಖಾಲಿ ಇರುವುದರಿಂದ ಆಡಳಿತ ಮತ್ತು ಸಂಶೋಧನೆಗೆ ಹಿನ್ನಡೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಕೈಗೊಂಡ ಕ್ರಮಗಳೇನು; | ಹೌದು.<br>ವಿಶ್ವವಿದ್ಯಾಲಯದ ಶಿಕ್ಷಣ ನಿರ್ದೇಶಕರನ್ನು ಪ್ರಭಾರಿ ಕುಲಪತಿಗಳಾಗಿ ನೇಮಿಸಲಾಗಿರುತ್ತದೆ. |
| ಇ) | ತೋಟಗಾರಿಕೆ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು ಮತ್ತು ಬೋಧಕೇತರ ಹುದ್ದೆಗಳು ಈ ಹುದ್ದೆಗಳ ಎಷ್ಟು ವರ್ಷಗಳಿಂದ ಖಾಲಿ ಇವೆ; ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು? | ತೋಟಗಾರಿಕಾ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಯಲ್ಲಿ ಒಟ್ಟು 705 ಹುದ್ದೆಗಳು ಖಾಲಿ ಇದ್ದು,<br>• 16 ಅಧಿಕಾರಿ, 27 ಪ್ರಾಧ್ಯಾಪಕರ, 59 ಸಹ ಪ್ರಾಧ್ಯಾಪಕರ, 53 ಸಹಾಯಕ ಪ್ರಾಧ್ಯಾಪಕರ, 320 ಬೋಧಕೇತರ ಹುದ್ದೆಗಳು ಮತ್ತು 230 ಗ್ರೂಪ್ 'ಡಿ' ಹುದ್ದೆಗಳು 2016ನೇ ಸಾಲಿನಿಂದ ಇಲ್ಲಿಯವರೆಗೆ ಖಾಲಿ ಇರುತ್ತವೆ.<br>• ಈ ಹುದ್ದೆಗಳನ್ನು ಭರ್ತಿ ಮಾಡಲು ಈ ಕೆಳಕಾಣಿಸಿದ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>1) ಕಲ್ಯಾಣ ಕರ್ನಾಟಕ ಸ್ಥಳೀಯ ವೃಂದದಡಿ 100 ಹುದ್ದೆಗಳನ್ನು ಭರ್ತಿ ಮಾಡಲು ಅಧಿಸೂಚನೆ ಹೊರಡಿಸಲಾಗಿದೆ.<br>2) 12 ಅಧಿಕಾರಿಗಳ ಹುದ್ದೆಗಳನ್ನು ಭರ್ತಿ ಮಾಡಲು ಅಧಿಸೂಚನೆ ಹೊರಡಿಸಲಾಗಿದೆ.<br>3) 115 ಹುದ್ದೆಗಳಿಗೆ ಬೋಧಕೇತರ ನೌಕರರನ್ನು ಬಡ್ತಿ ಮೂಲಕ ಭರ್ತಿ ಮಾಡುವ ಪ್ರಸ್ತಾವನೆ ಪರಿಶೀಲನೆಯಲ್ಲಿದೆ.<br>4) 10 ಗ್ರೂಪ್ 'ಸಿ' ಹುದ್ದೆಗಳನ್ನು ಅನುಕಂಪ ಆಧಾರಿತ ನೇಮಕಾತಿಗಾಗಿ ಮೀಸಲಿರಿಸಲಾಗಿದೆ. |

HORTI 83 HGM 2020

(ನಾರಾಯಣ ಗೌಡ)
ಮಾನ್ಯ ಪೌರಾಡಳಿತ, ತೋಟಗಾರಿಕೆ ಮತ್ತು ರೇಷ್ಮೆ ಸಚಿವರು